**ಕರ್ನಾಟಕ ವಿಧಾನ ಪರಿಷತ್ತು**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1572
ಸದಸ್ಯರ ಹೆಸರು : ಶ್ರೀ ಆರ್.ಪ್ರಸನ್ನಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 20.03.2020
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಗ್ರಾಮ ಪಂಚಾಯತಿಗಳಲ್ಲಿ ಹಲವಾರು ವರ್ಷಗಳಿಂದ ಕೆಲಸ ಮಾಡುತ್ತಿರುವ ಪೌರ ಕಾರ್ಮಿಕರನ್ನು ಖಾಯಂಗೊಳಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993 ರ ಪ್ರಕರಣ 112 ಮತ್ತು 113 ರಂತೆ ಗ್ರಾಮ ಪಂಚಾಯತಿಗಳು ಸ್ವಚ್ಛತಾಗಾರರನ್ನು ನೇಮಿಸಿಕೊಂಡು ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಅನುಮೋದನೆ ಪಡೆದ ನೌಕರರು ಗ್ರಾಮ ಪಂಚಾಯತಿಯ ಖಾಯಂ ನೌಕರರಾಗಿರುತ್ತಾರೆ. |
| (ಆ) | ಹಲವಾರು ವರ್ಷಗಳಿಂದ ಕಾರ್ಯನಿರ್ವಹಿಸುತ್ತಿರುವ ಪೌರ ಕಾರ್ಮಿಕರು ನಿವೃತ್ತಿ ಅಂಚಿನಲ್ಲಿದ್ದರೂ ಸಹ ಅವರುಗಳು ಸವಲತ್ತುಗಳಿಂದ ವಂಚಿತರಾಗುತ್ತಿದ್ದು, ಅಂತಹ ಕಾರ್ಮಿಕರನ್ನು ಖಾಯಂಗೊಳಿಸಿ ಅವರಿಗೆ ಸಿಗಬೇಕಾದ ಸವಲತ್ತುಗಳನ್ನು ನೀಡಲು ಸರ್ಕಾರ ಕ್ರಮ ಕೈಗೊಂಡಿದೆಯೇ; | ಸ್ವಚ್ಛತಾಗಾರರಿಗೆ ಕಾರ್ಮಿಕ ಇಲಾಖೆಯು ಆಗಿಂದಾಗ್ಗೆ ನಿಗಧಿಪಡಿಸುವ ಕನಿಷ್ಠ ವೇತನ ಮತ್ತು ತುಟ್ಟಿಭತ್ಯೆ ಮತ್ತು ರಜಾ ಸೌಲಭ್ಯಗಳನ್ನು ನೀಡಲಾಗುತ್ತಿದೆ. |
| (ಇ) | ಪೌರ ಕಾರ್ಮಿಕರು ಕೆಲಸ ಮಾಡುವ ಸಮಯದಲ್ಲಿ ಆರೋಗ್ಯದಲ್ಲಿ ಏರುಪೇರು ಆದಾಗ ಮತ್ತು ಅಪಘಾತಗಳು ಸಂಭವಿಸಿದಾಗ ಅವರಿಗೆ ಯಾವ ರೀತಿ ಸೌಲಭ್ಯಗಳನ್ನು ನಿಡಲಾಗುತ್ತಿದೆ? | ಸೇವೆಯಿಂದ ನಿವೃತ್ತಿ ಹೊಂದುವ ಸ್ವಚ್ಛತಾಗಾರರಿಗೆ ನಿವೃತ್ತಿ ಉಪದಾನ ಮತ್ತು ಮರಣ ಹೊಂದಿದ ನೌಕರರ ನ್ಯಾಯಬದ್ಧ ಅವಲಂಬಿತರಿಗೆ ಅನುಕಂಪದ ಆಧಾರದ ಮೇಲೆ ಗ್ರಾಮ ಪಂಚಾಯತಿಗಳು ನೇಮಕಾತಿ ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ.<br>ಪ್ರಸ್ತುತ ಗ್ರಾಮ ಪಂಚಾಯತಿ ನೌಕರರಿಗೆ ಸಂಬಂಧಿಸಿದಂತೆ The Karnataka Gram Swaraj and Panchayat Raj (Staffing Pattern, Scales of Pay, Method of Recruitment and Conditions of Service of Employees of Grama Panchayat) Rules, 2020 ರ ಕರಡನ್ನು ಸಂಸದೀಯ ವ್ಯವಹಾರಗಳ ಇಲಾಖೆಯು ಪರಿಶೋಧನೆ ಮಾಡಿದ್ದು, ದಿನಾಂಕ: 29-02-2020 ರಂದು ಪ್ರಕಟಿಸಲಾಗಿದ್ದು, ಅಂತಿಮವಾಗಿ ನಿಯಮಗಳನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ ನಂತರ ಗ್ರಾಮ ಪಂಚಾಯತಿ ನೌಕರರಿಗೆ ಇನ್ನಿತರ ಸೇವಾ ಸೌಲಭ್ಯಗಳು ದೊರೆಯುತ್ತವೆ. |

ಸಂ. ಗ್ರಾಅಪ 305 ಗ್ರಾಪಂಅ 2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು